## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** | : | **538** |
| **ಸದಸ್ಯರ ಹೆಸರು** | : | ಶ್ರೀ ಎಸ್ ವ್ಹಿ ಸಂಕನೂರ (ಪದವೀಧರರ ಕ್ಷೇತ್ರ) |
| **ಉತ್ತರಿಸಬೇಕಾದ ದಿನಾಂಕ** | : | 18.07.2019 |
| **ಉತ್ತರಿಸುವ ಸಚಿವರು** | : | ಮುಖ್ಯಮಂತ್ರಿ |

*****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಜಲ, ಪವನ ಸೌರ, ಉಷ್ಣ (ಥರ್ಮಲ್) ಅಣುಶಕ್ತಿ ಮುಂತಾದ ಮೂಲಗಳಿಂದ ಒಟ್ಟು ಎಷ್ಟು ವಿದ್ಯುಚ್ಛಕ್ತಿ ಉತ್ಪಾದನೆಯಾಗುತ್ತಿದೆ; (ಪ್ರತ್ಯೇಕ ವಿವರ ನೀಡುವುದು) | ರಾಜ್ಯಕ್ಕೆ, 2018-19 ನೇ ಸಾಲಿನಲ್ಲಿ ವಿವಿಧ ಮೂಲಗಳಿಂದ ಲಭ್ಯವಾಗಿರುವ ವಿದ್ಯುತ್ ಪ್ರಮಾಣದ ವಿವರಗಳನ್ನು **ಅನುಬಂಧ-1** ರಲ್ಲಿ ಒದಗಿಸಲಾಗಿದೆ. |
| ಆ) | ಒಟ್ಟು ಉತ್ಪಾದನೆಯಲ್ಲಿ ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳಿಗೆ ಹಾಗೂ ಕೃಷಿ ನೀರಾವರಿಗೆ ಎಷ್ಟು ಬಳಕೆಯಾಗುತ್ತಿದೆ; ಅದರಂತೆ ವಾಣಿಜ್ಯ ಮತ್ತು ಗೃಹ ಬಳಕೆಗೆ ಎಷ್ಟು ಉಪಯೋಗವಾಗುತ್ತಿದೆ; (ವಿವರವಾದ ಮಾಹಿತಿ ನೀಡುವುದು) | ರಾಜ್ಯಕ್ಕೆ, ವಿವಿಧ ಮೂಲಗಳಿಂದ ಲಭ್ಯವಾಗಿರುವ ವಿದ್ಯುತ್ತನ್ನು ರಾಜ್ಯದ ವಿವಿಧ ವರ್ಗದ ಗ್ರಾಹಕರುಗಳಿಗೆ ಸರಬರಾಜು ಮಾಡಲಾಗಿದ್ದು, ವಿದ್ಯುತ್ ಸರಬರಾಜು ಕಂಪನಿವಾರು, ಗ್ರಾಹಕರ ಬಳಕೆವಾರು ವಿವರಗಳನ್ನು **ಅನುಬಂಧ-2** ರಲ್ಲಿ ಒದಗಿಸಲಾಗಿದೆ. |
| ಇ) | ರಾಜ್ಯದಲ್ಲಿ ವಿದ್ಯುತ್ ಕೊರತೆ ಇದೆಯೇ; ಹಾಗಿದ್ದಲ್ಲಿ, ಅದನ್ನು ಯಾವ ರೀತಿ ನಿಭಾಯಿಸಲಾಗುತ್ತಿದೆ; (ಮಾಹಿತಿ ನೀಡುವುದು) | ಪ್ರಸ್ತುತ, ರಾಜ್ಯದಲ್ಲಿ ಬೇಡಿಕೆಗೆ ತಕ್ಕಂತೆ ವಿದ್ಯುತ್ ಪೂರೈಕೆಯಾಗುತ್ತಿದ್ದು, ಕೊರತೆಯು ಇರುವುದಿಲ್ಲ.<br>ಒಂದುವೇಳೆ ವಿದ್ಯುತ್ ಕೊರತೆ ಉಂಟಾದಲ್ಲಿ, ತಾತ್ಕಾಲಿಕ ಕೊರತೆಯನ್ನು ನೀಗಿಸಲು ಎಸ್ಕಾಂಗಳು ಕೋರಿಕೆಯನ್ನು ಸಲ್ಲಿಸಿದ ನಂತರ, ವಿದ್ಯುತ್ತನ್ನು ಎನರ್ಜಿ ಎಕ್ಸ್ ಚೇಂಜ್ ಮುಖಾಂತರ ದಿನವಹಿ ಅವಶ್ಯಕತೆಯ ಆಧಾರದ ಮೇಲೆ ವಿದ್ಯುತ್ ಖರೀದಿ ಮಾಡಲಾಗುತ್ತದೆ. |
| ಈ) | ವಿವಿಧ ರೀತಿಯಲ್ಲಿ ಉತ್ಪಾದನೆಯಾಗುವ ವಿದ್ಯುತ್ ಶಕ್ತಿಯಲ್ಲಿ ಯಾವ ಮೂಲದ ಉತ್ಪಾದನೆ ನಿಭಾಯಿಸಲಾಗುತ್ತಿದೆ; (ಮಾಹಿತಿ ನೀಡುವುದು) | ರಾಜ್ಯದಲ್ಲಿ ಜಲವಿದ್ಯುತ್, ಶಾಖೋತ್ಪನ್ನ , ಪವನ ವಿದ್ಯುತ್, ಸೌರಶಕ್ತಿ, ಇತರೆ ಅಸಂಪ್ರದಾಯಿಕ ಮೂಲಗಳು (ಕೋ-ಜನ್, ಬಯೋಮಾಸ್, ಕ್ಯಾಪ್ಟೀವ್, ಮಿನಿಹೈಡಲ್) ಬೃಹತ್ ಐಪಿಪಿ (ಯುಪಿಸಿಎಲ್) ಕೇಂದ್ರದಿಂದ ರಾಜ್ಯದ ಪಾಲು (ಶಾಖೋತ್ಪನ್ನ ಮತ್ತು ಅಣುವಿದ್ಯುತ್), ಈ ಮೂಲಗಳಿಂದ ವಿದ್ಯುತ್ತಿನ ಉತ್ಪಾದನೆಯಾಗುತ್ತಿದ್ದು, ಹಾಗೆಯೇ ಈ ಎಲ್ಲಾ ಮೂಲಗಳಿಂದಲೂ ವಿದ್ಯುತ್ತಿನ ಉತ್ಪಾದನೆಯನ್ನು ನಿಭಾಯಿಸಲಾಗುತ್ತಿದೆ. |
| ಉ) | ರೈತರ ನೀರಾವರಿ ಕೆಲಸಕ್ಕಾಗಿ ವಿದ್ಯುತ್ತಿನ ಕೊರತೆ ಇದೆ ಎಂಬ ರೈತರ ಕೂಗು ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಅದನ್ನು ಪರಿಹರಿಸಲು ಯಾವ ಕ್ರಮ ಕೈಗೊಳ್ಳಲಾಗಿದೆ? | ರಾಜ್ಯಾದ್ಯಂತ, ಸರ್ಕಾರದ ಆದೇಶದಂತೆ ರೈತರ ನೀರಾವರಿ ಪಂಪ್ ಸೆಟ್ ಗಳಿಗೆ ಹಗಲಿನ ವೇಳೆ 4 ಗಂಟೆಗಳು ಹಾಗೂ ರಾತ್ರಿಯ ವೇಳೆ 3 ಗಂಟೆಗಳ ಕಾಲ 3 ಫೇಸ್ ವಿದ್ಯುತ್ತನ್ನು (ದಿನವಹಿ 7 ಗಂಟೆಗಳ ಕಾಲ) ಪೂರೈಕೆ ಮಾಡಲಾಗುತ್ತಿದ್ದು, ವಿದ್ಯುತ್ ಕೊರತೆ ಇರುವುದಿಲ್ಲ.<br>ತಾಂತ್ರಿಕ ಸಾಧ್ಯತೆ ಇರುವ ಪ್ರದೇಶಗಳಲ್ಲಿ, ರೈತರ ನೀರಾವರಿ ಪಂಪ್ ಸೆಟ್ ಗಳಿಗೆ ಹಗಲಿನ ವೇಳೆ ನಿರಂತರ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಪೂರೈಕೆ ಮಾಡಲಾಗುತ್ತಿದೆ. |

**ಸಂಖ್ಯೆ: ಎನರ್ಜಿ 67 ಇಬಿಎಸ್ 2019**

(ಹೆಚ್.ಡಿ.ಕುಮಾರಸ್ವಾಮಿ)

ಮುಖ್ಯಮಂತ್ರಿ

(V)

**ಕರ್ನಾಟಕ ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ. ಎಸ್.ವಿ ಸಂಕನೂರ ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 538 ಕ್ಕೆ**

**ಅನುಬಂಧ -1**

ರಾಜ್ಯಕ್ಕೆ, 2018-19 ನೇ ಸಾಲಿನಲ್ಲಿ ವಿವಿಧ ಮೂಲಗಳಿಂದ ಲಭ್ಯವಾಗಿರುವ ವಿದ್ಯುತ್ ಪ್ರಮಾಣದ ವಿವರಗಳು ಕೆಳಕಂಡಂತಿವೆ.

| ಕ್ರಮ ಸಂಖ್ಯೆ | ವಿದ್ಯುತ್ತಿನ ಮೂಲಗಳು | 2018-19 (ಮಿ.ಯೂ.ಗಳಲ್ಲಿ) |
|---|---|---|
| 1 | ಜಲವಿದ್ಯುತ್ | 11994.53 |
| 2 | ಶಾಖೋತ್ಪನ್ನ | 12554.72 |
| 3 | ಪವನ ವಿದ್ಯುತ್ ಸೌರಶಕ್ತಿ, ಹಾಗು ಇತರೆ ಅಸಂಪ್ರದಾಯಿಕ ಮೂಲಗಳಿಂದ | 22082.93 |
| 4 | ಬೃಹತ್ ಐಪಿಪಿ | 5342.46 |
| 5 | ಇತರೆ | 24170.84 |
| | ಒಟ್ಟು | **76145.48** |

**ಕರ್ನಾಟಕ ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ. ಎಸ್.ವಿ ಸಂಕನೂರ ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 538 ಕ್ಕೆ**

**ಅನುಬಂಧ -2**

2018-19 ನೇ ಸಾಲಿನಲ್ಲಿ ರಾಜ್ಯದಲ್ಲಿ ವಿವಿಧ ಮೂಲಗಳಿಂದ ಲಭ್ಯವಾದ ವಿದ್ಯುತ್ತನ್ನು, ವಿವಿಧ ವರ್ಗದ ಗ್ರಾಹಕರುಗಳಿಗೆ ಸರಬರಾಜು ಮಾಡಲಾಗುತ್ತಿದ್ದು, ವಿದ್ಯುತ್ ಸರಬರಾಜು ಕಂಪನಿವಾರು, ಗ್ರಾಹಕರ ಬಳಕೆವಾರು ವಿವರಗಳು ಕೆಳಕಂಡಂತಿವೆ.

| ಬಳಕೆ ವರ್ಗ | ಬೆ.ವಿ.ಕಂ | ಮ.ವಿ.ಕಂ | ಚಾವಿಸನಿನಿ | ಹು.ವಿ.ಕಂ* | ಗು.ವಿ.ಕಂ |
|---|---|---|---|---|---|
| ಗೃಹ ಬಳಕೆ | 7257.72 | 1445.39 | 1126.10 | 1753.42 | 1395.94 |
| ಕೈಗಾರಿಕೆ | 5729.60 | 1019.74 | 911.32 | 1603.70 | 1315.85 |
| ವಾಣಿಜ್ಯ | 4532.06 | 570.72 | 430.83 | 602.82 | 419.03 |
| ನೀರಾವರಿ ಪಂಪ್ ಸೆಟ್ | 7208.92 | 1638.66 | 2906.32 | 7271.23 | 3524.62 |
| ದಾರಿ ದೀಪ | 499.92 | 69.83 | 117.49 | 152.09 | 252.69 |
| ಇತರೆ | 2507.82 | 431.62 | 863.52 | 657.15 | 614.43 |

* ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರಿ ಸಂಘದ ವತಿಯಿಂದ ಹುಕ್ಕೇರಿ ತಾಲ್ಲೂಕಿನಲ್ಲಿ ವಿದ್ಯುತ್ ಸರಬರಾಜು ಮಾಡಲಾಗುತ್ತಿರುವ ಪ್ರಮಾಣವನ್ನು ಒಳಗೊಂಡಿರುತ್ತದೆ.